# ಅಧ್ಯಾಯ – 5

## ಆಧುನಿಕ ಸಮರ್ಥಕರು

ಅತಿ ಹಿಂದಿನ ಪ್ರಾಚೀನ ಕಾಲದಿಂದ ಹಿಡಿದು ಆಧುನಿಕ ಕಾಲದವರೆಗೂ ಭಾರತೀಯ ಸಮಾಜದಲ್ಲಿ ಶಿಕ್ಷಣವು ಪ್ರಧಾನ ಪಾತ್ರವಿದ್ದರೂ ಈ ವಿಷಯದ ಬಗೆಗಿನ ಪಾಂಡಿತ್ಯಪೂರ್ಣ ಸಾಹಿತ್ಯ ಅಷ್ಟೇನೂ ಮನಮುಟ್ಟುವಂತಿಲ್ಲ. ಪಾಶ್ಚಿಮಾತ್ಯ ಲೇಖಕರು ಆಧುನಿಕ ಮತ್ತು ಸಮಕಾಲೀನ ಶಿಕ್ಷಣ ಮತ್ತು ಶೈಕ್ಷಣಿಕ ಸುಧಾರಣೆಗಳ ವಿವಿಧ ಅಂಶಗಳ ಬಗ್ಗೆ ಬರೆದಿದ್ದಾರೆ. (ಉದಾಹರಣೆಗೆ, Thomas B. Macaulay (ಥಾಮಸ್ ಬಿ. ಮೆಕೋಲೆ) ಯವರ ಪಾತ್ರ). ಭಾರತೀಯ ಶಿಕ್ಷಣದ ಹಿಂದಿನ ಹಂತಗಳನ್ನು ಬಹುತೇಕ ಭಾರತೀಯ ವಿದ್ವಾಂಸರೇ ಅಧ್ಯಯನ ಮಾಡಿದ್ದಾರೆ. ಅವರಲ್ಲಿ ಕೆಲವರು ಆಳವಾದ ಜ್ಞಾನವನ್ನು ಹೊಂದಿದ್ದ ವಿದ್ವಾಂಸರಾಗಿದ್ದರು. ಅವರು ಸಂಗ್ರಹಿಸಿದ್ದ ಮಾಹಿತಿಗಳು ಹಾಗೂ ವಿಷಯಗಳು ಉಪಯುಕ್ತತೆಯನ್ನು ಹೊಂದಿದ್ದರೂ ಅವರ ಅಧ್ಯಯನವು ಆಶ್ಚರ್ಯಕರವಾಗಿ ಅಷ್ಟೇನೂ ತೃಪ್ತಿಕರವಾಗಿಲ್ಲ. ಈ ಸ್ಥಿತಿಗೆ ಹಲವಾರು ಕಾರಣಗಳಿವೆ. ಇದರ ಒಂದು ಕಾರಣವೆಂದರೆ ಈ ಲೇಖಕರಿಗಿದ್ದ ಬೇರೂರಿದ ಪೂರ್ವಗ್ರಹಗಳು. ಇವರಲ್ಲಿ ಬಹುತೇಕರು ಮೇಲ್ಜಾತಿಗಳಿಗೆ ಸೇರಿದವರಾಗಿದ್ದು ಅವರುಗಳು ಬ್ರಾಹ್ಮಣರ ಪರವಾಗಿದ್ದರು. ಇದರಿಂದಾಗಿ ಆಲ್ಟೇಕರ್ (Altekar),[1] "ಸಾಮಾನ್ಯವಾಗಿ ಅವರು ಉಳಿದೆಲ್ಲ ಜಾತಿಗಳ ಸದಸ್ಯರಿಗಿಂತ ಬುದ್ದಿಶಾಲಿಗಳಾದುದರಿಂದ. . ." ಎಂದು ಬ್ರಾಹ್ಮಣರ ಪಾತ್ರದ ಬಗ್ಗೆ ಹೇಳುತ್ತಾ, ಶೂದ್ರರು ತಮ್ಮ ವಿಭಿನ್ನ ಉಚ್ಚಾರಣೆಯ ಅಭ್ಯಾಸದಿಂದಾಗಿ ಪವಿತ್ರ ಗ್ರಂಥಗಳಲ್ಲಿ ತಪ್ಪುಗಳನ್ನು ಸೇರಿಸಿಬಿಡಬಹುದೆಂಬ ಭಯದಿಂದ ವೇದಾಧ್ಯಯನದಿಂದ ಅವರನ್ನು ಹೊರಗಿಟ್ಟಿದ್ದನ್ನು; "ಮಲಬಾರ್ ಗುಡ್ಡದ (ಪಶ್ಚಿಮ ಘಟ್ಟದಲ್ಲಿ) ಮೇಲೆ ಬೆಳೆದು ನಿಂತ ಬಿದಿರು ಮರಗಳು ಬಿದಿರೇ ಆಗಿರಲು ಸಾಧ್ಯವೇ ಹೊರತು ಶ್ರೀಗಂಧದ ಮರಗಳಾಗುವುದಿಲ್ಲ"[2] ಎನ್ನುವ ಹಾಗೆ ಒಳ್ಳೆಯ ರೀತಿಯ ಪೋಷಣೆ ಸಹ ಮೂಲ ಸ್ವಭಾವವನ್ನು ಬದಲಾಯಿಸುವುದಿಲ್ಲ ಎಂಬಂಥ ನಂಬಿಕೆಗಳನ್ನು ಹೊಂದಿದ್ದ ಬ್ರಾಹ್ಮಣರ ತಾರತಮ್ಯಪೂರಿತ ಆಚರಣೆಗಳನ್ನು ಸಮರ್ಥಿಸಿದ್ದರು. ನಂತರದಲ್ಲಿ ಅವರು ಶೂದ್ರರನ್ನು ಆರ್ಯರ ಪವಿತ್ರ ಆಚರಣೆಗಳ ಪ್ರಬಲ ಕರ್ಮಗಳಿಂದ ಹೊರಗಿಟ್ಟು ಅವರನ್ನು ಅಧೀನರನ್ನಾಗಿ ಇಡುವುದೇ ಇದರ ಪ್ರಮುಖ ಉದ್ದೇಶವಾಗಿತ್ತು ಎಂದು ಹೆಚ್ಚು ಪ್ರಾಮಾಣಿಕ ವಿವರಣೆಗಳನ್ನು ಸೇರಿಸಿದರು.[3] ವೇದ ಪಠ್ಯಗಳ ಲೇಖಕರಿಗೆ ಒಳ್ಳೆಯ ಶಿಕ್ಷಣದ ಶಕ್ತಿಯಲ್ಲಿ ಹಾಗೂ ಮನುಷ್ಯನು ತಾನಿರುವ ಸ್ಥಾನದಿಂದ ಮೇಲೇಳುವ ಸಾಮರ್ಥ್ಯದಲ್ಲಿ ಗಾಢವಾದ ಭರವಸೆ ಇತ್ತೆಂಬುದನ್ನು ಆಲ್ಟೇಕರ್ ಅರಿತಿದ್ದರು. ಅವರು ನಂತರದಲ್ಲಿ ಕಂಡುಬಂದ ಬೆಳವಣಿಗೆಗಳಲ್ಲಿನ ಬಳುವಳಿಯಾಗಿ ಪಡೆದಂತಹ ವೈಶಿಷ್ಟ್ಯತೆಗಳಿಗೆ, ಕರ್ಮ ಹಾಗೂ ಪುನರ್ಜನ್ಮಕ್ಕೆ ನೀಡಿದ ಪ್ರಧಾನ ಪಾತ್ರಕ್ಕೆ ಮತ್ತು ಜಾತಿ ವ್ಯವಸ್ಥೆಯ ನಿಷ್ಠುರತೆಗೆ ನೀಡಿದ ಪ್ರಾಶಸ್ತ್ಯವನ್ನು, "ಪೋಷಣೆ"ಯಿಂದ "ಮೂಲ ಸ್ವಭಾವ" ಕ್ಕೆ ಬದಲಾಯಿಸಲು ಕಾರಣವಾದ ಜೀವನ ವಿದ್ಯಮಾನದ ಅತ್ಯಂತ ಜಾಗರೂಕ ಸಂಶೋಧನೆಗೆ ಆರೋಪಿಸಿದರು.[4]

ವಸಾಹತುಶಾಹಿ ಆಳ್ವಿಕೆಯ ಒತ್ತಡಗಳು ಮತ್ತು ಸ್ವಾತಂತ್ರ್ಯಕ್ಕಾಗಿ ನಡೆದ ಹೋರಾಟವು, ವೈಭವೀಕರಿಸಿದ ಗತಕಾಲ ಮತ್ತು ಕಾವ್ಯಮಯ ಅತಿಶಯೋಕ್ತಿಗಳ ತೋರಿಕೆಯ ಉತ್ಪ್ರೇಕ್ಷಿತ ಹೇಳಿಕೆಗಳಿಗೆ ಕಾರಣವಾಗಿರುವುದನ್ನು ವಿವರಿಸುತ್ತದೆ.[5] ಆಲ್ಟೇಕರ್ (Altekar)[6] ಮತ್ತು ಮುಖರ್ಜಿ (Mookerji)[7] ಯು, ಛಾಂದೋಗ್ಯ ಉಪನಿಷತ್ತಿನ V 11, 5 ನಲ್ಲಿ "ನನ್ನ ರಾಜ್ಯದಲ್ಲಿ ಕಳ್ಳನಿಲ್ಲ, ಪವಿತ್ರಾಗ್ನಿಯನ್ನು ಹೊಂದಿರದವನೊಬ್ಬನೂ ಕಂಡು ಬರುವುದಿಲ್ಲ, ಮತ್ತು ಯಾವೊಬ್ಬ ಅಜ್ಞಾನಿಯೂ ಇಲ್ಲಿಲ್ಲ"[8] ಎಂದು ಒಬ್ಬ ರಾಜನ ಹೆಗ್ಗಳಿಕೆಯ ಹೇಳಿಕೆಯನ್ನು ನೋಡಿ ಅವನ ರಾಜ್ಯದಲ್ಲಿ ಸಂಪೂರ್ಣ ಸಾಕ್ಷರತೆ ಮತ್ತು ಕಡ್ಡಾಯ ಸಾರ್ವತ್ರಿಕ ಶಿಕ್ಷಣವಿತ್ತೆಂಬ ತೀರ್ಮಾನಕ್ಕೆ ಬರುತ್ತಾರೆ. ಆದರೆ ಈ ಉಪನಿಷತ್ತನ್ನು ರಚಿಸಿದ ಸಂದರ್ಭದಲ್ಲಿ ಬಹುಶಃ ಬರವಣಿಗೆ ತಿಳಿದಿಲ್ಲದಿರಬಹುದಾದ ಸಾಧ್ಯತೆಯಿದೆ. ಆದ್ದರಿಂದ, ರಾಜನ ಹೆಗ್ಗಳಿಕೆಯ ಮಾತುಗಳು ಅಲ್ಲಿ ಸಾಕ್ಷರತೆಯಿತ್ತೆಂಬುದರ ಸತ್ಯವನ್ನು ಅಷ್ಟೇನೂ ಸಾಬೀತುಪಡಿಸುವುದಿಲ್ಲ.

ಕೆಳವರ್ಗದವರನ್ನು ನಿಶ್ಚಿತವಾಗಿ ವಿದ್ವತಪೂರ್ಣ ಶಿಕ್ಷಣ ಸೌಲಭ್ಯದಿಂದ ಹೊರಗಿಡಲಾಗಿತ್ತು. ಅವರಿಗೆ ಅವರ ಜಾತಿಗೆ

ಸಂಬಂಧಪಟ್ಟ ಕಸುಬಿನಲ್ಲಿ ಮಾತ್ರ ತರಬೇತಿ ನೀಡಲಾಗುತ್ತಿತ್ತು. ಕೆಲವೊಮ್ಮೆ, ಕೆಲವು ಆಧುನಿಕ ಲೇಖಕರು ಕೆಳವರ್ಗದವರ ಮೇಲೆ ಮೆಹರ್ಬಾನಿಯನ್ನು ತೋರಿಸುತ್ತಾರೆ. ಶೂದ್ರರು ಕೆಲವೊಂದು ಧಾರ್ಮಿಕ ಆಚರಣೆಗಳಲ್ಲಿ (ಅಂದರೆ ಪೋಷಕ ಚಂದಾದಾರರಾಗಿ) ಭಾಗವಹಿಸಿರಬಹುದು, ಮತ್ತು ಧಾರ್ಮಿಕ ಆಚರಣೆಗಳನ್ನು ಬುದ್ಧಿವಂತಿಕೆಯಿಂದ ನೆರವೇರಿಸಬೇಕಾದ ಕಾರಣದಿಂದ "ಅವರು ಅದಕ್ಕೆ ಬೇಕಾದ ಬೌದ್ಧಿಕ ಜ್ಞಾನವನ್ನು ಪಡೆಯಬಹುದಾಗಿತ್ತು" ಎಂದು ಮುಖರ್ಜಿಯು[9] ಮಿಮಾಂಸ ಸೂತ್ರ VI 1, 1-7 ದಿಂದ ತೀರ್ಮಾನಿಸುತ್ತಾರೆ. ಅಂದರೆ ಅದನ್ನು ಬುದ್ಧಿವಂತಿಕೆಯಿಂದ ನೆರವೇರಿಸುವುದು ಬ್ರಾಹ್ಮಣ ಪುರೋಹಿತರ ಪಾತ್ರವಾಗಿತ್ತೆಂದು ಮತ್ತು ಅಲ್ಲಿ ಶೂದ್ರರಿಗೆ ಧಾರ್ಮಿಕ ಆಚರಣೆಗಳಲ್ಲಿ ತರಬೇತಿ ಇರಲಿಲ್ಲವೆನ್ನುವುದನ್ನು ಅದು ಸೂಚಿಸುತ್ತದೆ. "ನಮ್ಮ ಕುಟುಂಬದಲ್ಲಿ ಯಾರೊಬ್ಬರೂ ಅಧ್ಯಯನ ಮಾಡುವುದರಲ್ಲಿ ವಿಫಲರಾಗುವುದಿಲ್ಲ. ಮತ್ತು ಕೇವಲ ಅವನೊಬ್ಬ ಬ್ರಾಹ್ಮಣನ ಸಂಬಂಧಿಯಂತೆ ಬದುಕಿರುವುದಿಲ್ಲ"[10] ಎಂದು ಛಾಂದೋಗ್ಯ ಉಪನಿಷತ್ತಿನಲ್ಲಿ ಉದ್ದಾಲಕ ಆರುಣಿಯು ಹೇಳಿದ ಮಾತುಗಳು ಉಪನಿಷತ್ತುಗಳ[11] ಕಾಲಘಟ್ಟದಲ್ಲಿ ಅನೇಕ ಬ್ರಾಹ್ಮಣರು ಸಹ ಅಧ್ಯಯನ ಮಾಡುತ್ತಿರಲಿಲ್ಲ ಎನ್ನುವುದನ್ನು ಸ್ಪಷ್ಟಪಡಿಸುತ್ತದೆ. ಮೌಖಿಕ ಸಂವಹನಗಳ ಆಧಾರದ ಮೇಲೆ ಋಷಿಗಳು, ಆರ್ಯನ್ನರು ಮತ್ತು ಬರ್ಬರರು (***ಮ್ಲೇಚ್ಛಾ*** "ವಿದೇಶಿಯರು") ಕೂಡ ಸಮಾನವಾಗಿ ಜ್ಞಾನದ ಅರ್ಹ ಮೂಲಗಳೆಂದು ತಿಳಿಸುವ ವಾತ್ಸ್ಯಾಯನನ ನ್ಯಾಯ ಸೂತ್ರದ ಬಗೆಗಿನ ಭಾಸ್ಯಾದ ***ಆಪ್ತೋಪದೇಶ I 1.7 ಶಬ್ದವಾದ*** "ಒಬ್ಬ ಸಮರ್ಥ ವ್ಯಕ್ತಿಯಿಂದ ಬರುವ ಮೌಖಿಕ ಆದೇಶವು ಆದೇಶವೇ" ಎನ್ನುವುದನ್ನು ಮುಖರ್ಜಿಯವರು ಆಧರವನ್ನಾಗಿ ಬಳಸುತ್ತಾರೆ. ಇಲ್ಲಿ ವಾತ್ಸ್ಯಾಯನನು ***ವ್ಯವಹಾರದ*** ಅಂದರೆ "ಪ್ರಾಪಂಚಿಕ ಆಗು ಹೋಗು"ಗಳ ಬಗ್ಗೆ ಉಲ್ಲೇಖಿಸಿರುವನೇ ಹೊರತು ಧಾರ್ಮಿಕ ಆದೇಶಗಳನ್ನಲ್ಲ: ಮುಂದಿನ ಪಟ್ಟಣಕ್ಕೆ ದಾರಿ ತೋರಿಸಿದ ಪಕ್ಷದಲ್ಲಿ ಅಥವಾ ಹೊರಗಿನ ಹವಾಮಾನದ ಬಗ್ಗೆ ಮಾತನಾಡಿದಲ್ಲಿ ಓರ್ವ ವಿದೇಶಿಯನ ಹೇಳಿಕೆಯನ್ನು ಸಹ ಪರಿಗಣಿಸಬಹುದು ಎಂದವನು ಹೇಳುತ್ತಿರುವುದಾಗಿ ಕಂಡುಬರುವುದರಿಂದ, ಈ ಮೇಲಿನ ಹೇಳಿಕೆಯು "ತತ್ವಶಾಸ್ತ್ರಜ್ಞರ (ದಾರ್ಶನಿಕರ) ವಿಶಾಲ ಉದಾರತೆ ಮತ್ತು ಸಹನೆಯನ್ನು ತೋರಿಸುವುದಿಲ್ಲ, ಏಕೆಂದರೆ ಅವರು ಬರಡಾದ ಮತ್ತು ನಿರ್ವಿಕಾರವಾದ ತಾರ್ಕಿಕತೆಯ ಆಧಾರದ ಮೇಲೆ ವೇದದಿಂದ ಹೊರತಾದ ವಿಷಯಗಳಿಗೆ ವೇದ ದರ್ಶನಗಳಿಗೆ ನೀಡುವ ಸಮನಾದ ಮನ್ನಣೆಯನ್ನು ನೀಡಲು ಸಾಧ್ಯವಾಗಲಿಲ್ಲ"[12].

ಪ್ರಾಚೀನ ಭಾರತೀಯ ಸಂಸ್ಥೆಗಳು ದೊಡ್ಡ ಆಧುನಿಕ ವಿಶ್ವವಿದ್ಯಾಲಯಗಳಂತೆ ಢಂಬಾಚಾರದ ಆಚರಣೆಗಳನ್ನು ಮಾಡುತ್ತವೆಂಬ ಸುಳ್ಳು ಆರೋಪವನ್ನು ಹೊರಿಸಲಾಗಿತ್ತು: ವೇದದ ಉಪಾಧ್ಯಾಯರೊಬ್ಬರು ಅಧ್ಯಯನದ ಅಂತ್ಯದ ಸಮಯದಲ್ಲಿ ಒಂದಿಬ್ಬರು ವಿದ್ಯಾರ್ಥಿಗಳನ್ನು ಕಳುಹಿಸಿ ಕೊಡುವಾಗ ಹೇಳಿದ ಮಾತುಗಳನ್ನು, ವಿಶ್ವವಿದ್ಯಾಲಯದ "ಕುಲಪತಿಗಳ ಭಾಷಣ" ವೆಂದು ಹೇಳಿದರೆ ಅದು ದಿಕ್ಕು ತಪ್ಪಿಸುತ್ತದೆ[13]. ಆಲ್ಟೇಕರ್‌ರವರು ""ಶೈಕ್ಷಣಿಕ ಪ್ರಯತ್ನ ಮತ್ತು ಚಟುವಟಿಕೆಗಳಿಗೆ ಮುಖ್ಯ ಪ್ರೇರಣೆಯಾಗಿದ್ದದ್ದು ರಾಷ್ಟ್ರೀಯ ಪರಂಪರೆಯನ್ನು ಕಾಪಾಡುವ ಆಕಾಂಕ್ಷೆಯೆ ಹೊರತು ಪದವಿಯ ವ್ಯಾಮೋಹವಲ್ಲ"[14] ಎಂದು ಹೇಳುತ್ತಾರೆ. ಆದರೆ ಪ್ರಾಚೀನ ಭಾರತದಲ್ಲಿ ರಾಷ್ಟ್ರದ ಪರಿಕಲ್ಪನೆಯೇ ಆಸ್ತಿತ್ವದಲ್ಲಿರಲಿಲ್ಲವಾದುದರಿಂದ ರಾಷ್ಟ್ರದ ಪರಂಪರೆಯನ್ನು ಕಾಪಾಡಲು ಒಟ್ಟುಗೂಡುವ ಪ್ರಶ್ನೆಯೇ ಬರುವುದಿಲ್ಲ. ವೈದಿಕ ಅಧ್ಯಯನದ ಯಶಸ್ವಿ ಮುಕ್ತಾಯ ಓರ್ವನ ಘನತೆಯನ್ನು ಹೆಚ್ಚುಸುತ್ತಿತ್ತು ಹಾಗೂ ***ಸ್ನಾತಕ*** ಪದವಿ ಪಡೆದ ಅವನಿಗೆ ಹೂಮಾಲೆಯನ್ನು ಹಾಕಿ ಅತ್ಯಂತ ಗೌರವದಿಂದ ಮನೆಗೆ ಕರೆದುಕೊಳ್ಳಲಾಗುತ್ತಿತ್ತು.

ಈ ಆಧುನಿಕ ಸಮರ್ಥಕರು ಪ್ರಾಚೀನ ಶೈಕ್ಷಣಿಕ ಆಚರಣೆಗಳು ಸಮಂಜಸವಾಗಿತ್ತು ಎನ್ನುವುದನ್ನು ಆಧುನಿಕ ನಗರವಾಸಿ ಓದುಗರಿಗೆ ತೋರಿಸುವ ಪ್ರಯತ್ನವನ್ನು ಮಾಡುತ್ತಾರೆ. ಪಠ್ಯಗಳನ್ನು ಬಾಯಿಪಾಠ ಮಾಡುವ ಅಭ್ಯಾಸ ಹೆಚ್ಚಾದ ಕಾರಣ ಅದೇ ಪಠ್ಯ ಪುಸ್ತಕಗಳ ವ್ಯಾಖ್ಯಾನ ಎಷ್ಟು ನೆನೆಗುದಿಗೆ ಬಿದ್ದಿತ್ತೆಂದರೆ ಈ ವೇದ ವಿದ್ವಾಂಸರುಗಳು ಪಠ್ಯಪುಸ್ತಕಗಳನ್ನು ವಾಚಿಸುವರೆ ವಿನಃ, ಅವುಗಳನ್ನು ಅವರಿಂದ ವಿವರಿಸಲಾಗುತ್ತಿರಲಿಲ್ಲ, ಅಥವಾ ಅದರ ಅರ್ಥವನ್ನು ಗ್ರಹಿಸಿಕೊಳ್ಳಲಾಗುತ್ತಿರಲಿಲ್ಲ ಈ ಬೆಳವಣಿಗೆಯನ್ನು ಪ್ರಜ್ಞಾಪೂರ್ವಕ ತೀರ್ಮಾನವೆಂಬಂತೆ ಮಾರ್ಪಡಿಸಲಾಯಿತು( ಆದರೆ ಯಾರಿಂದ ಎನ್ನುವುದು ಪ್ರಶ್ನೆಯಾಗಿಯೇ ಉಳಿದಿದೆ): "ವೇದ ಸಾಹಿತ್ಯದ ಬೆಳವಣಿಗೆಯಿಂದಾಗಿ ಹಾಗೂ ಅದೆಲ್ಲವನ್ನು ಸಂಪೂರ್ಣವಾಗಿ ಮತ್ತು ಕಡ್ಡಾಯವಾಗಿ ಸ್ಮರಣೆಯಲ್ಲಿಟ್ಟುಕೊಳ್ಳುವ ಅವಶ್ಯಕತೆಯುಂಟಾದ ಕಾರಣ, ಒಲ್ಲದ ಮನಸ್ಸಿನಿಂದ ಬ್ರಾಹ್ಮಣರ ಒಂದು ಗುಂಪಿಗೆ ವೇದ ಪಠ್ಯಗಳನ್ನು ಕಂಠಪಾಠ ಮಾಡುವುದನ್ನು, ಮತ್ತು ಇನ್ನೊಂದು ಗುಂಪಿಗೆ ಅದರ ವಿವರಣೆಯನ್ನು ನೀಡುವ ಜವಾಬ್ದಾರಿಯನ್ನು ವಹಿಸಲಾಯಿತು."[15] ಆದರೆ ಈ ಪ್ರಜ್ಞಾಪೂರ್ವಕ ಕ್ರಿಯೆಗೆ ಯಾವುದೇ ಪುರಾವೆಗಳಿಲ್ಲ. ಸಿ.ಕುನ್ಹನ್‌ರಾಜ(C.Kunhan Raja)[16] ರವರಿಗೆ ಹದಿಹುಡುಗರನ್ನು ಮನೆಯಿಂದ ದೂರದಲ್ಲಿ ಅವರ ಗುರುಗಳ ಬಳಿ ವಾಸ ಮಾಡಲು ಕಳುಹಿಸುವ ಪದ್ದತಿ ಅಹಿತವಾಗಿದ್ದ ಕಾರಣ, ಅವರು ಸ್ಪಷ್ಟ ಸಾಕ್ಷಿಯ ವಿರುದ್ಧವಾಗಿ, ಬಹುತೇಕ ವಿದ್ಯಾರ್ಥಿಗಳನ್ನು ಬಹುಶಃ ಸಂಜೆಯ

ವೇಳೆಗೆ  ಮನೆಗೆ ಹೋಗಲು ಬಿಡುತ್ತಿದ್ದರೆಂದು, ವಾದಿಸುತ್ತಾರೆ.

ವಿಶ್ವದಾದ್ಯಂತ ಅನೇಕ ಸಂಸ್ಕೃತಿಗಳ ಯಥೇಚ್ಛವಾದ ಜನಾಂಗಶಾಸ್ತ್ರೀಯ ಪುರಾವೆಗಳು ಹೇಳುವುದೇನೆಂದರೆ, ವಯಸ್ಕರ ಪ್ರಪಂಚದ ಧೋರಣೆಗಳ ಬಗ್ಗೆ ಉಪದೇಶಗಳು ಮತ್ತು ಆ ಬುಡಕಟ್ಟು ಜನಾಂಗವು ನಂಬಿದ ವಿಶ್ವದೃಷ್ಟಿಯ ದೀಕ್ಷೆಯನ್ನು ಉದ್ದೇಶಪೂರ್ವಕವಾಗಿ ಒಬ್ಬ ಬಾಲಕನಿಗೆ ಮಾನಸಿಕ ಆಘಾತಗಳನ್ನು ಉಂಟುಮಾಡುವ ಅನುಭವಗಳ ಮೂಲಕ ನೀಡಲಾಗುತಿತ್ತು; ಮಿತಭಾಷಿ ಹಾಗೂ ಶಸ್ತ್ರಸಜ್ಜಿತರಾದ ಆಗಂತುಕ ಅಪರಿಚಿತರು ಅವನನ್ನು ಬಲವಂತದಿಂದ ಕರೆದುಕೊಂಡು ಹೋಗಿ ಕಾಡಿನ ಒಂದು ಗುಪ್ತ ಸ್ಥಳದಲ್ಲಿರಿಸಿ ಅನೇಕ ಕಠೋರ ಪರೀಕ್ಷೆಗಳಿಗೊಳಪಡಿಸಿ ಅವನಿಗೆ ಅವನ ಜನರ ಧಾರ್ಮಿಕ ಆಚರಣೆ ಹಾಗೂ ರಹಸ್ಯಗಳನ್ನು ಪರಿಚಯ ಮಾಡಿಸುತ್ತಿದ್ದರು.[17]

---

ಆದರೆ ಆಧುನಿಕ ವಿದ್ವತಿನಲ್ಲಿ ಪ್ರಾಚೀನ ಸಂಪ್ರದಾಯಗಳಿಗೆ ಪ್ರತಿರೂಪವಾದ ಆಧುನಿಕ ಮತ್ತು ಬಹುತೇಕ ಪಾಶ್ಚಾತ್ಯ ಸಂಪ್ರದಾಯಗಳನ್ನು ಮುರಿದುಹಾಕುವ ಯತ್ನವನ್ನು ಮಾಡುವುದರ ಜೊತೆಗೆ ಪ್ರಾಚೀನ ಸಂಪ್ರದಾಯಗಳನ್ನು ಕೊಂಡಾಡುವ ವಿರುದ್ಧ ಪ್ರವೃತ್ತಿಯು ಸಹ ಕಂಡುಬರುತ್ತದೆ.  ಅತ್ಯಂತ ಪ್ರಾಚೀನ ಸಾಹಿತ್ಯ ಕೃತಿಗಳನ್ನು ಅನುಕರಣೀಯವಾದ ನಿಷ್ಠೆಯಿಂದ ಕಾಪಾಡಿಕೊಂಡು ಬಂದ ಭಾರತೀಯರಿಗೆ ಅವರ ಮೌಖಿಕ ಸಂಪ್ರದಾಯಗಳ ಬಗ್ಗೆ ಹೆಮ್ಮೆಪಡಲು ಬಹಳಷ್ಟು ಕಾರಣಗಳಿವೆ; ಆದರೆ ಭಾರತೀಯ ಸಾಂಪ್ರದಾಯಿಕ ಸಂಸ್ಕೃತಿಯಲ್ಲಿ ಪುಸ್ತಕಗಳು ಸಹ ಒಂದು ಮುಖ್ಯ ಪಾತ್ರವನ್ನು ಪಡೆದು ಅವುಗಳು  ಮಾನವ ಸ್ಮರಣಾ ಶಕ್ತಿ ಸಾಮರ್ಥ್ಯವನ್ನು ಮೀರಿದ ವ್ಯಾಪಕವಾದ ಅಧ್ಯಯನಗಳ, ವಿಶಿಷ್ಟವಾಗಿ ಅತಿ ವಿರಳವಾಗಿ ಅಧ್ಯಯನ ಮಾಡಲ್ಪಡುವ ಗ್ರಂಥಗಳನ್ನು ಕಾಪಾಡುವುದರಲ್ಲಿ ತಮ್ಮ ಮೌಲ್ಯವನ್ನು ಸಾಭೀತುಪಡಿಸಿವೆ. ಆದರೂ  ಅಲ್ಲಲ್ಲಿ ಎಸ್.ಸಿ.ಸರ್ಕಾರ್ (S.C.Sarkar) ರಂತಹವರ ಧ್ವನಿಗಳು ಕೇಳಿಬರುತ್ತವೆ. ಸರ್ಕಾರ್‌ರವರು ಒಂದೆಡೆ ರವೀಂದ್ರನಾಥ ಠಾಕೂರರ ಭಾವಾನುವಾದ ಮಾಡುತ್ತಾ "ಪಾಶ್ಚಾತ್ಯ ದೇಶಗಳಂತೆ ಭಾವನೆ, ಧ್ವನಿ ಮತ್ತು ಚಲನೆಯಿಂದ ಜೀವಂತವಾಗಿಸುವ ಮಾತಿನ ಶಬ್ಧಗಳಿಗೆ ಆದ್ಯತೆ ನೀಡುವುದರ ಬದಲು ಕೇವಲ ಕಲಿಯುವ ಸಾಧನ ಸಲಕರಣೆಗಳಂತೆ ಉಪಯೋಗಿಸಬೇಕಾದ ಪುಸ್ತಕಗಳ ಮೇಲಿನ ಅತೀ ಅವಲಂಬನೆಯು 'ಪ್ರಪಂಚದ ಬಗ್ಗೆ  ಜುಗುಪ್ಸೆ'ಯ ಭಾವನೆಯನ್ನು ಹುಟ್ಟಿಸಿದೆ"[18] ಎಂದು ಹೇಳಿದರೆ, ಇನ್ನೊಂದೆಡೆ ಅವರು ದಕ್ಷಿಣ ಆಫ್ರಿಕಾದಲ್ಲಿ ಪುಸ್ತಕಗಳಿಗಿಂತ ಹೆಚ್ಚಾಗಿ ಕರಕುಶಲತೆಗಳಿಗೆ ಹೆಚ್ಚು ಒತ್ತು ನೀಡಿದ ಶಾಲೆಗಳನ್ನು ಸ್ಥಾಪಿಸಿದ ಗಾಂಧೀಜಿಯವರನ್ನು ಹೊಗಳುತ್ತಾರೆ. ನಿಜವಾಗಿಯೂ, ಗಾಂಧೀಜಿಯವರು ಪುಸ್ತಕ ಕಲಿಕೆಗಿಂತ ಕರಕುಶಲತೆಗಳನ್ನು ಹೇಳಿಕೊಡುವುದು ಬಡ ಜನರಿಗೆ ಒಂದು ಜೀವನೋಪಾಯವನ್ನು ಕಂಡುಕೊಳ್ಳಲು ಅನುವು ಮಾಡಿಕೊಡುವುದಷ್ಟೆ ಅಲ್ಲದೇ, ಅದು ವ್ಯಕ್ತಿತ್ವವನ್ನು ಬೆಳೆಸುವುದೆಂದು ಪರಿಗಣಿಸಿದ್ದರು.

ಆರ್.ಕೆ.ಮುಖರ್ಜಿಯವರು ಸ್ವೇಚ್ಛಾನುಸಾರವಾಗಿ, ಯೋಗ ಸೂತ್ರದ 12ರಲ್ಲಿನ ಯೋಗ-ನಿಗ್ರಹದ "***ಯೋಗಶ್ಚಿತ:-ವೃತ್ತಿ-ನಿರೋಧ:*** (ಯೋಗವು ಚಿತ್ತಚಾಂಚಲ್ಯವನ್ನು ನಿರ್ಬಂಧಿಸುತ್ತದೆ)" ಎನ್ನುವ ವಿವರಣೆಯನ್ನು ಅದನ್ನು ಶಿಕ್ಷಣಕ್ಕೆ ಅನ್ವಿಸುತ್ತಾ "ಶಿಕ್ಷಣದ ಗುರಿಯು ***ಚಿತ್ತ-ವೃತ್ತಿ-ನಿರೋಧ,*** ಅಂದರೆ ಜಗತ್ತಿನ ಇನ್ನಿತರ ವಿಷಯ ಅಥವಾ ವಸ್ತುಗಳೊಂದಿಗೆ ಸಂಬಂಧಿಸುವಂತಹ ಮನಸ್ಸಿನ ಚಟುವಟಿಕೆಗಳನ್ನು ತಡೆಯುತ್ತದೆ."[19] ಎಂದು ಹೇಳಿದರು. *Local Government in Ancient India* (ಪ್ರಾಚೀನ ಭಾರತದಲ್ಲಿನ ಸ್ಥಳೀಯ ಸರ್ಕಾರ)ದಿಂದ ಹಿಡಿದು, *The Gupta Empire* (ಗುಪ್ತ ಸಾಮ್ರಾಜ್ಯ) ಮತ್ತು *Early India Art* (ಆದಿಕಾಲದ ಭಾರತ ಕಲೆ) ಅಂತಹ ಪುಸ್ತಕಗಳನ್ನೂ ಸೇರಿದಂತೆ ವಿವಿಧ ವಿಷಯಗಳ ಬಗ್ಗೆ ಹದಿನಾರು ಪುಸ್ತಕಗಳನ್ನು ಬರೆದಿರುವೆನೆಂದು ಹೆಮ್ಮೆಯಿಂದ ಉಲ್ಲೇಖಿಸುವ[20] ಲೇಖಕನ ಹೇಳಿಕೆ ವ್ಯಂಗವೆಂಬಂತೆ ತೋರಿಬರುತ್ತದೆ.  ಮುಖರ್ಜಿಯವರ ಹೇಳಿಕೆಗಳು ಭಾರತದ ಚಿಂತನೆಯಲ್ಲಿನ ವಿರಕ್ತ ಹಾಗೂ ಅಲೌಕಿಕ ಪ್ರವೃತ್ತಿಗಳನ್ನು ಎತ್ತಿ ಹಿಡಿಯುತ್ತಾ, ಭಾರತದ ಅನೇಕ ಶೈಕ್ಷಣಿಕ ಸಾಧನೆಗಳನ್ನು ಮತ್ತು ಪಾಂಡಿತ್ಯವನ್ನು ನಿರ್ಲಕ್ಷಿಸುತ್ತವೆ. ಆದರೆ ಇದರಲ್ಲಿ ಅವರೊಬ್ಬರೇ ಅಲ್ಲ, ಪ್ರತಿಯೊಬ್ಬರು ಸಹ ಹಾಗೆ ಉಚ್ಛರಿಸಲ್ಪಟ್ಟ ಮಾತುಗಳಿಂದ ಭಾರತಕ್ಕೆ ಹೇಗೆ ಉಪಯೋಗವಾಗಿದೆ ಎಂದು ಕೇಳಿಕೊಳ್ಳಬೇಕಾಗುತ್ತದೆ. ವಿವೇಕಾನಂದರು (Rousseau(ರೂಸೋರವರಂತೆಯೆ)) "ಶಿಕ್ಷಣವೆಂಬುದು ಮನುಷ್ಯನಲ್ಲಿ ಈಗಾಗಲೇ ಇರುವ ಪರಿಪೂರ್ಣತೆಯ ಅಭಿವ್ಯಕ್ತತೆ"[21] ಎಂದು ಹೇಳಿರುವುದಲ್ಲದೆ ನ್ಯೂಟನ್(Newton) ರವರ ಗುರುತ್ವಾಕರ್ಷಣೆಯ ಆವಿಷ್ಕಾರವು ಸೇಬಿನಿಂದ

ಬರದೆ ನ್ಯೂಟನ್‌ರವರ ಸ್ವಂತ ಮನಸ್ಸಿನಿಂದ ಬಂದದ್ದು ಎಂದು ವಾದಿಸಿದ್ದಾರೆ. ಬೀಳುತ್ತಿರುವ ಸೇಬು ಆಳವಾಗಿ ಯೋಚಿಸುತ್ತಿದ್ದ ನ್ಯೂಟನ್‌ರವರ ಮನಸ್ಸಿಗೆ ಸೂಚನೆಯಂತೆ ಬಂದಿತ್ತಷ್ಟೆ.[22] ಎಂದು ಹೇಳಿರುತ್ತಾರೆ. ಅದು ಅರ್ಧ ಸತ್ಯವಷ್ಟೆ; ಬರೀ ಪರಿವೀಕ್ಷಣೆಗಳು ಪರಿಕಲ್ಪನೆಗಳನ್ನು ಮತ್ತು ಸಿದ್ಧಾಂತಗಳನ್ನು ಸೃಷ್ಟಿಸುವುದಿಲ್ಲ. ಸಾಮಾನ್ಯವಾಗಿ ಪರಿವೀಕ್ಷಣೆಗಳಿಂದ ಪ್ರಚೋದಿಸಲ್ಪಡುವ ಪರಿಕಲ್ಪನೆಗಳು ಅಸ್ತಿತ್ವದಲ್ಲಿರುವ ಪರಿವೀಕ್ಷಣೆಗಳೊಂದಿಗೆ ತಾಳೆ ಹೊಂದಬೇಕು. ಆದರೆ ದುರದೃಷ್ಟವಶಾತ್ ಹಲವಾರು ಭಾರತೀಯ ಲೇಖಕರು ಪರಿವೀಕ್ಷಣೆಯ ಪಾತ್ರವನ್ನು ಗೌಣವೆಂದು ಪರಿಗಣಿಸುತ್ತಾರೆ. ಭಾರತೀಯ ನಾಗರೀಕತೆಯು, "ಯಾವುದೇ ಸಾಮಾಜಿಕ ಬೇಡಿಕೆಗಳ ಮತ್ತು ಬದ್ಧತೆಗಳ ಒತ್ತಡವಿಲದೆ ಮನುಷ್ಯನ ಆಂತರಿಕ ಅಗತ್ಯತೆಗಳಿಗೆ ಸ್ಪಂದಿಸುತ್ತ ಪ್ರಕೃತಿಯೊಂದಿಗಿನ ಅತಿ ಹತ್ತಿರದ ಸಂಬಂಧದಿಂದ ಬೆಳೆದುಬಂದ,"[23] ಒಂದು ಅನನ್ಯ ಮೂಲವನ್ನು ಹೊಂದಿರುವುದಾಗಿ ಪರಿಗಣಿಸಲಾಗಿದೆ.

ಭಾರತೀಯ ಶೈಕ್ಷಣಿಕ ವ್ಯವಸ್ಥೆಯನ್ನು ಏನೇ ಆಗಲಿ ಕೊಂಡಾಡಬೇಕೆಂಬ ಪ್ರವೃತ್ತಿ ಪ್ರಾಸಂಗಿಕವಾಗಿ ಪಶ್ಚಿಮದ ಬಗ್ಗೆ ಒಂದು ಪ್ರತಿಕೂಲದ ಮನೋಭಾವವನ್ನು ಅಳವಡಿಸಿಕೊಳ್ಳುತ್ತದೆ. ಕಲಾ ಇತಿಹಾಸಕಾರರಾದ ಆನಂದ ಕುಮಾರಸ್ವಾಮಿ (Ananda Coomaraswamy) ಕುಶಲಕರ್ಮಿಗಳನ್ನು ಹೊಗಳುತ್ತಾ, "ಅವನೊಬ್ಬ ತನ್ನ ಸ್ವಂತ ವೈಯಕ್ತಿಕ ಮನಸ್ಸಿನ ಕೊಂಕಾಟವನ್ನು ಅಭಿವ್ಯಕ್ತಪಡಿಸದೆ ಚಿರಂತನ ಸೌಂದರ್ಯ ಮತ್ತು ಎಂದೂ ಬದಲಾಗದ ನಿಯಮಗಳ ಆದರ್ಶಗಳನ್ನು ಅಭಿವ್ಯಕ್ತಪಡಿಸುವ ವಿಶ್ವದ ಒಂದು ಭಾಗವೆಂದು ತನ್ನನ್ನು ಪರಿಗಣಿಸುತ್ತಾನೆ.... ಹಳೇ ಸಂಪ್ರದಾಯಿಯ ಪೂರ್ವದ ಕುಶಲಕರ್ಮಿಗಳು 'ತಮ್ಮ ಸ್ವಂತ ಕಲ್ಪನೆಗಳನ್ನು ಅನುಸರಿಸಿ ಚಿತ್ರಬಿಡಿಸುವವರ' ಬಗ್ಗೆ ತಾತ್ಸಾರದಿಂದ ಮಾತನಾಡುತ್ತಾನೆ, ಮತ್ತು ಅವನ ಈ ಅಭಿಪ್ರಾಯವನ್ನು ಸಮರ್ಥಿಸಲು ಅನೇಕ ಕಾರಣಗಳಿವೆ"[24] ಎಂದು ಹೇಳುತ್ತಾರೆ. ಪಿ.ಕೆ.ಮುಖೋಪಾಧ್ಯಾಯ (P.K.Mukhopadhyay)[25]ರವರು ಬಹುಶಃ ಎಡ್ವರ್ಡ್ ಸಯೀದ್ (Edward Said) ಪುಸ್ತಕ "Orientalism(ಒರಿಯೆಂಟಲಿಸಂ)"[26] ನಿಂದ ಪ್ರಭಾವಿತರಾಗಿ, 'ಪಶ್ಚಿಮವು ಪಾಶ್ಚಾತ್ಯ ಮಾನದಂಡಗಳನ್ನು ಮತ್ತು ಭಾರತೀಯ ಕೀಳರಿಮೆಯನ್ನು ಒಪ್ಪಿಕೊಳ್ಳುವಂತಹ ಒಂದು ಭಾರತೀಯ ಮನೋಸ್ಥಿತಿಯನ್ನು ಸೃಷ್ಟಿ ಮಾಡಿದೆ; ಭಾರತೀಯರು ಇದರಿಂದ ಮುಕ್ತರಾಗಬೇಕೆಂದು,' ಹೇಳುತ್ತಾರೆ. ಹತ್ತಿರದ ಪೂರ್ವ ದೇಶಗಳಲ್ಲಿನ ಬೆಳವಣಿಗೆಗಳಿಗೆ ಸಂಬಂಧಿಸಿದಂತೆ ಇರುವ ಸಯೀದ್‌ರವರ ಪುಸ್ತಕದ ಅರ್ಹತೆಗಳೇನೇ ಇದ್ದರು ಸಹ ಭಾರತಕ್ಕೆ ಅವರ ಪ್ರಬಂಧದ ಪ್ರಾಸಂಗಿಕ ಅನ್ವಯಿಕೆಯು ತೃಪ್ತಿಕರವಾಗಿಲ್ಲ. ಮೆಕೋಲೆಯವರಂತಹ ಇಂಗ್ಲಿಷ್ ಜನರು ಶಿಕ್ಷಣವನ್ನು ಆಧುನೀಕರಿಸಿ ಅದನ್ನು ವಾಸ್ತವಾಂಶ ಆಧಾರಿತವನ್ನಾಗಿ ಮತ್ತು ಐತಿಹಾಸಿಕವಾಗಿ ಮಾಡಿದರೆ (ವಿಶಿಷ್ಟವಾಗಿ ನೈಸರ್ಗಿಕ ವಿಜ್ಞಾನಕ್ಕೆ ಪ್ರಾಶ್ಯಸ್ತವನ್ನು ಕೊಟ್ಟರು), ಸಾಂಪ್ರದಾಯಿಕ ಶಿಕ್ಷಣವು ಶಾಸ್ತ್ರಾಂಧತೆಯನ್ನು ಬಲಪಡಿಸಿ, ಸಂಶೋಧನೆಗೆ ಪ್ರೋತ್ಸಾಹ ನೀಡದೆ ಅದು ಭಾರತವು ಯುಗಾಂತರಗಳಿಂದಲೂ ಬದಲಾಗದಿರುವ ದೇಶವೆಂದು ಒಂದು ತಪ್ಪು ಕಲ್ಪನೆಯನ್ನು ನೀಡಿತು. ವಿವೇಕಾನಂದರು: "ಕೆಲವು ದೇಶಗಳಲ್ಲಿ, ಶಿಕ್ಷಕರು ತಮಗೆ ಸೇರಬೇಕಾದ 5 ಡಾಲರ್‌ಗಳನ್ನು ನಿರೀಕ್ಷಿಸುತ್ತಾ ಕೇವಲ ಉಪನ್ಯಾಸಕರಾದರೆ, ಕಲಿಯುವ ವಿದ್ಯಾರ್ಥಿ ಶಿಕ್ಷಕರ ಮಾತುಗಳನ್ನು ತನ್ನ ತಲೆಯಲ್ಲಿ ತುಂಬಿಕೊಳ್ಳುವುದನ್ನು ನಿರೀಕ್ಷಿಸುತ್ತಾನೆ ಮತ್ತು ಈ ನಿರೀಕ್ಷೆಗಳು ಪೂರೈಕೆಯಾದನಂತರ ಪ್ರತಿಯೊಬ್ಬರೂ ತಮ್ಮದೇ ಆದ ದಾರಿಯನ್ನು ಹಿಡಿಯುತ್ತಾರೆ"[27] ಎಂದು ವಿಷಾದ ವ್ಯಕ್ತಪಡಿಸಿದರು.

ಭಾರತದ ಶೈಕ್ಷಣಿಕ ವ್ಯವಸ್ಥೆಯ ಗುಣಲಕ್ಷಣವಾದ ***ಗುರು*** ಮತ್ತು ಶಿಷ್ಯರ ನಡುವಿನ ಹತ್ತಿರದ ನಂಟನ್ನು ಪಾಶ್ಚಾತ್ಯ ಶೈಕ್ಷಣಿಕ ವ್ಯವಸ್ಥೆಯು ಹೊಂದಿರುವುದಿಲ್ಲ.[28] ಆದರೆ ಗುರು ಮತ್ತು ಶಿಷ್ಯನ ಪರಸ್ಪರ ಸ್ವಾತಂತ್ರ್ಯವನ್ನು ಲಕ್ಷ್ಯ ಮಾಡದ ಪಾಂಡಿತ್ಯದ ಅರ್ಥವಿಲ್ಲದ ಶಬ್ದಗಳೊಂದಿಗೆ ಸಮೀಕರಿಸುವುದು ನ್ಯಾಯಯುತವಲ್ಲ; ಕೆಲವೊಮ್ಮೆ ಮನಸ್ಸಿಲ್ಲದ ಬೋಧನೆಯು ನಿಶ್ಚಿತವಾಗಿ ಪಾಶ್ಚಾತ್ಯ ಶಿಕ್ಷಣಕ್ಕೆ ಸೀಮಿತವಾಗಿಲ್ಲ. ನಾವು ಭಾರತೀಯ ವೈದಿಕೀಯ ಸಂಪ್ರದಾಯದ ಪ್ರಾಚೀನ ವೇದ ಪಾಠಗಳನ್ನು *(veda-pathaka-s (ವೇದ ಪಾಠಕಾಸ್))* ಉದಾಹರಣೆಯಾಗಿ ಕೊಡಬೇಕಾದ ಅಗತ್ಯವೇ ಬರುವುದಿಲ್ಲ ಏಕೆಂದರೆ ಕಳೆದ ಹಲವಾರು ಶತಮಾನಗಳಿಂದ ಭಾರತದಲ್ಲಿ ಸ್ಥಗಿತಗೊಂಡ ವಿಜ್ಞಾನದ ಬೆಳವಣಿಗೆ (ಮತ್ತು ಪ್ರಸಕ್ತ ಶಾಲಾ ವ್ಯವಸ್ಥೆಯ ಅಂಶಗಳು ಸಹ) ನಮಗೆ ಯಥೇಚ್ಛ ಉದಾಹರಣೆಗಳನ್ನು ಒದಗಿಸುತ್ತವೆ. ಮುಖರ್ಜಿಯವರ ಶಾಲೆಗಳ ಬಗೆಗಿನ ಉಲ್ಲೇಖನವು: "ಈ ಶಾಲೆಗಳಲ್ಲಿ ಅನುಸರಿಸಿದ ಬೋಧನಾ ವಿಧಾನಗಳು ಸಾಮಾನ್ಯವಾಗಿ ಆಧುನಿಕ ಶಾಲೆಗಳಲ್ಲಿ ಕಂಡು ಬರುವ ಶಿಕ್ಷಣ ಪೂರ್ಣಗೊಳಿಸಿದ ವಿದ್ಯಾರ್ಥಿಗಳಲ್ಲಿ ಕಲಿಯುವ ಆಸಕ್ತಿಯನ್ನೇ ಹೊಸಕಿ ಹಾಕಿಬಿಡುವ ಯಾಂತ್ರಿಕ, ಆತ್ಮಶೂನ್ಯ ಮತ್ತು ಹೊರೆಯಾಗಿರುವ ಶಾಲೆಗಳಾಗಿರಲಿಲ್ಲ"[29] ಎಂದು ಹೇಳಿರುವುದು ಬಹುಶಃ ಸಮಕಾಲೀನ ಶಾಲೆಗಳನ್ನು ಹಳೆಯ ಬ್ರಾಹ್ಮಣ ಸಾಂಪ್ರಾದಾಯಿಕ ಶಾಲೆಗಳೊಂದಿಗೆ ಹೋಲಿಸಿ ಹೇಳಿದಂತೆ ಕಂಡು ಬರುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ: "ಶಿಷ್ಯನು

ಗುರುವಿನ ಆಂತರಿಕ ವಿಧಾನ, ಅವರ ದಕ್ಷತೆಯ ರಹಸ್ಯ, ಅವರ ಕಾರ್ಯ ಮತ್ತು ಜೀವನದ ಸ್ಫೂರ್ತಿಯನ್ನು ಮೈಗೂಡಿಸಿಕೊಳ್ಳಬೇಕು, ಆದರೆ ಇವುಗಳು ಅತ್ಯಂತ ಸೂಕ್ಷ್ಮ ವಿಚಾರಗಳಾಗಿದ್ದು ಅವುಗಳನ್ನು ಹೇಳಿಕೊಡಲಾಗುವುದಿಲ್ಲ"[30] ಎಂದು ಅವರು ***ಗುರುಕುಲದಲ್ಲಿನ*** ಶಿಕ್ಷಣವನ್ನು ಹೊಗಳುತ್ತಾರೆ.

ತಮ್ಮಗೆ ಸರಿಸಾಟಿಯಿಲ್ಲದ ವಿ.ಆರ್.ಮಾಧವನ್ (V.R.Madhavan)ರವರು ತಮಿಳು ವೈದ್ಯಕೀಯ ಸಂಪ್ರದಾಯವನ್ನು ವೈಭವೀಕರಿಸುವ ಪ್ರಯತ್ನದ ಸಲುವಾಗಿ, ಪಾಶ್ಚಿಮಾತ್ಯ ವೈದ್ಯಕೀಯ ವಿಜ್ಞಾನವನ್ನು ತೀವ್ರವಾಗಿ ಟೀಕಿಸಿದರು. ಅವರು, "ನಿಜವಾದ ವಿಜ್ಞಾನವೆಂದು ಅವರು ಕಲ್ಪಿಸಿಕೊಳ್ಳುವ ಆಧುನಿಕ ಪಾಶ್ಚಾತ್ಯ ವೈದ್ಯಕೀಯ ಕಲೆಯು ಅವರ ಊಹಾಪೋಹ ಮತ್ತು ಕಲ್ಪಿಸಿಕೊಳ್ಳಲಾದ ಮತ್ತು ಹಲವಾರು ಆಕರಗಳಿಂದ ಸಂಗ್ರಹಿಸಲಾದ ಜ್ಞಾನದ ಅವಶಿಷ್ಟ ಭಾಗಗಳ ಮೇಲೆ ಆಧಾರಿತದ್ದಾಗಿರುತ್ತದೆ; ಆದ್ದರಿಂದ ಅಧುನಿಕ ವಿಜ್ಞಾನಕ್ಕೆ ಹೆಚ್ಚಿನದಾಗಿ ತಿಳಿದಿರುವುದು ವಿದ್ಯುನ್ಮಾನ ಶಾಸ್ತ್ರ (electronics) ಮತ್ತು ಇತರ ಆಧುನಿಕ ಆವಿಷ್ಕರಣೆಗಳಿಗೆ ಸಂಬಂಧಿಸಿದಂತಹ ಮೆಲ್ನೋಟದ ಜ್ಞಾನ"[31] ಎಂದು ಟೀಕಿಸಿದರು.

**ಅನುವಾದ:**
**ಪರಿಶೀಲನೆ:**

**Footnotes**

1. A.S.Altekar, *Education in Ancient India,* 6th ed., Benares 1965, p.43.

2. Altekar, *ibid.*, p.39 with reference to Subhasita-ratna-bhandara 41.7; also Ram Gopal, *India of Vedic Kalpasutras*, Delhi 1959, p. 126.

3. Altekar, *ibid.*, p.46; cf. below pp. 197-199.

4. Altekar (ಆಲ್ಟೇಕರ್), ಅದೇ., ಪುಟ.38. ಅವರು ವ್ಯತಿರಿಕ್ತವಾದ ಮಾರ್ಗವನ್ನು ಬಳಸಿ ಅವರ ಅಭಿಪ್ರಾಯದಲ್ಲಿ ಮಹಿಳೆಯು ವೇದಾಧ್ಯಯನಕ್ಕೆ ಮತ್ತು ದೀಕ್ಷೆ ಪಡೆಯುವ ಹಕ್ಕನ್ನು ಏಕೆ ಕಳೆದುಕೊಳ್ಳಬೇಕಾಯಿತೆಂಬುದನ್ನು ವಿವರಿಸಿಸುತ್ತಾರೆ: ಬಾಲ್ಯ ವಿವಾಹಗಳಿಂದಾಗಿ ಓರ್ವ ಹುಡುಗಿಯು ವೇದಾಧ್ಯಯನಕ್ಕೆಂದು ಮುಡುಪಿಡಲಾಗಬೇಕಾದ ಸಮಯವು ಸೀಮಿತಗೊಳ್ಳುವ ಕಾರಣ ಅವರು ಸಮರ್ಥ ವಿದ್ವಾಂಸರಾಗುವುದು ಸಾಧ್ಯವಾಗುವುದಿಲ್ಲ ಮತ್ತು "ವೇದಾಧ್ಯಯನಗಳನ್ನು ಹವ್ಯಾಸವಾಗಿ ಮಾಡುವುದು ನಿಷ್ಪ್ರಯೋಜಕವಷ್ಟೆ ಅಲ್ಲದೆ ಅದು ಅಪಾಯಕಾರಿ"ಯೆಂದು (ಅದೇ., ಪುಟ.217)ಸಹ ಪರಿಗಣಿಸಲಾಗಿತ್ತು.

5. M. Srinivasa Aiyangar's (ಎಂ ಶ್ರೀನಿವಾಸ ಅಯ್ಯಂಗಾರ)ರ ಪರೋಕ್ಷ ಪ್ರಸ್ತಾಪದಂತೆ (ಪತ್ಯದ ಉಲ್ಲೇಖವಿಲ್ಲದೆ) ಪಾಂಡಿಯ ರಾಜ್ಯದ ರಾಣಿಯೊಬ್ಬಳು ಕವಿಯ ಕೋಪವನ್ನು ಶಮನ ಮಾಡಲು ಪುರುಷವೇಷಿಯಾಗಿ ರಾತ್ರಿಯಿಡಿ ಅವನ ಪಲ್ಲಕಿಯನ್ನು ಹೊತ್ತಳಂತೆ (*Tamil Studies* (ತಮಿಳು ಅಧ್ಯಯನಗಳು), ಮದ್ರಸ್ 1914, ಪುನರ್ ಮುದ್ರಣ. ನವ ದೆಹಲಿ 1982, ಪುಟ. 260). ಇದನ್ನೇ S.Gurumurthy (ಎಸ್.ಗುರುಮೂರ್ತಿ)ಯವರು ಪುನರುಚ್ಚರಿಸಿ ಸ್ವಾರಸ್ಯಕರವಾಗಿ, *Education in South India* (ದಕ್ಷಿಣ ಭಾರತದಲ್ಲಿ ಶಿಕ್ಷಣ), ಮದ್ರಾಸ್ 1979, ಪುಟ. 153 ರಲ್ಲಿ: ಕವಿಗಳಿಗೆ ರಾಜರು ಸಹ ಪಲ್ಲಕ್ಕಿ ಹೊರುತ್ತಿದ್ದರು! ಎಂದು ಮಾಡಿದರು.

6. Altekar, *ibid.*, p. 177.

7. R.K.Mookerji, *Ancient Indian Education*, p.102.

8. ChU V 11.5 *na me steno janapade...nanahitagnir navidvan;* cf. also Ramayana I 6.8 and 12-14.

9. Mookerji, *ibid.*, p.274.

10. ChU VI 1,1 *na vai somyasmat-kulino 'nanucya brahma-bandhur iva bhavati.*
The Mahabhasya vol.1 p.411,16f. quotes a stanza:

*tapah srutam ca yonis cety etad brahmana-karakam/*
*tapah-srutabhyam yo hino jati-brahmana eva sah //*

"ನಿಷ್ಠುರತೆ, ಕಲಿಕೆ ಮತ್ತು ಹುಟ್ಟು – ಇವುಗಳು ಒಬ್ಬನನ್ನು ಬ್ರಾಹ್ಮಣನನ್ನಾಗಿಸುತ್ತದೆ; ಕಲಿಕೆ ಮತ್ತು ನಿಷ್ಠುರತೆ ಇಲ್ಲದವನು ಕೇವಲ ಹುಟ್ಟಿನಿಂದ/ಜಾತಿಯಿಂದ ಬ್ರಾಹ್ಮಣನಾಗಿರುತ್ತಾನೆ."

11.ನಂತರದಲ್ಲಿ Manu(ಮನು)II–168ನೆ ಶ್ಲೋಕ ವೇದವನ್ನು ಅಧ್ಯಯನ ಮಾಡದೇ ಇನ್ನಿತರ ಕಾರ್ಯಗಳಲ್ಲಿ ತೊಡಗುವ ದ್ವಿಜನನ್ನು ಖಂಡಿಸುತ್ತಾ ಅಂತಹವನು ತನ್ನ ಜೀವಿತಾವಧಿಯಲ್ಲೇ ಶೂದ್ರನಾಗುವನೆಂದು ನಂತರದಲ್ಲಿ ಅವನ ಸಂತಾನಗಳು ಶೂದ್ರರಾಗುವರೆಂದು ತೆಗೆಳುತ್ತಾನೆ.

12. Mookerji, *ibid.*, p.277.

13. Mookerji, *ibid.*, p. 100; Altekar, *Education*, p. 121.

14. Altekar, *ibid.*, p. 171.

15. Altekar, *ibid.* p. 164.

16. C.Kunhan Raja, *Some Aspects of Education in Ancient India*, Madras 1950, pp.105f.

17. C.W.M.Hart, in: *Education and Culture*, ed. George D.Spindler, New York 1963, pp.410-415.

18. S.C.Sarkar, *The Story of Education for All*, Calcutta 1960, p. 228. A stanza attributed to Narada in Smrticandrika I p. 52 calls reliance on books one of the six obstacles to knowledge (Kane, *HoDh* vol.2 p.349).

19. Mookerji, *Education*, p. xxii; cf. also p.366.

20. Mookerji, *ibid.*, p.ii.

21. *The Complete Works of Swami Vivekananda*, 10th ed. Calcutta 1972, vol. IV p. 358;cf. also the remark quoted p.314 fn.5 below.

22. *The Complete Works of Swami Vivekananda*, Mayavati 1946, vol. I ("Karmayoga"), p.26.

23. S.C.Sarkar, *The Story*, p.227.

24. A.K.Coomaraswamy, *The Indian Craftsman*, London 1909, p.75. Elsewhere he concedes, though, that "too conclusive reliance on traditional practice has led to mental stagnation which deprives Indian art of its former vitality" *(Medieval Sinhalese Art*, 2nd ed., New York 1956, p.ix).

25. P.K.Mukhopadhyay, in: D.P.Chattopadhyaya, Ravinder Kumar (editors), *Language, Logic and Science in India*, New Delhi 1995, pp. 13-18.

26. Edward Said, *Orientalism*, New York 1978.

27. S.C.Sarkar, *ibid.*, p.212; his opinion echoes that of A.K.Coomaraswamy, *The Indian Craftsman*, London 1909, pp.84-86.

28. “ಈ ಹತ್ತಿರದ ಸಂಬಂಧಗಳು ವಿದ್ಯಾರ್ಥಿಯ ಮೊದಲ ಹೆಜ್ಜೆಯನ್ನೇ ಕುಂಠಿತಗೊಳಿಸಬಹುದು ಅಥವಾ ಅವನ ಮೇಲೆ ಗುರುವಿನ ಕೆಟ್ಟ ನಕ್ಷತ್ರಗಳ ವಿಲಕ್ಷಣತೆಗಳು ಪ್ರಭಾವಿಸಬಹುದು. ವಿದ್ಯಾರ್ಥಿಗಳು ಬೇರೆ ಬೇರೆ ಶಿಕ್ಷಕರಿಂದ ವಿವಿಧ ವಿಷಯಗಳನ್ನು ಕಲಿತು ಅವುಗಳನ್ನು ಸಮಗ್ರವಾಗಿ ನೋಡುವುದನ್ನು ಪ್ರತಿಯೊಬ್ಬ ವಿದ್ಯಾರ್ಥಿಗೆ ಬಿಡಲಾದ ಶಾಸ್ತ್ರೀಯ ಮಾದರಿಯಿಂದ ಕವಲೊಡೆದ Saint Augustine (ಸಂತ ಅಗಸ್ಟೀನ್) ಮತ್ತು ಅವನ ನಂತರದವರಿಂದ ಸ್ಥಾಪಿಸಲ್ಪಟ್ಟ ಆರಂಭಿಕ ಕ್ರಿಶ್ಚಿಯನ್ ಶಾಲೆಗಳು *convicts* (ಕನ್ವಿಕ್ಟಸ್) ಎಲ್ಲಾ ವಿಷಯಗಳನ್ನು ಒಂದೇ ಸ್ಥಳದಲ್ಲಿ ಸಮಗ್ರವಾದ ರೀತಿಯಲ್ಲಿ ಕಲಿಸುತ್ತಿದ್ದವು. ಆರಂಭಿಕ ಕ್ರಿಶ್ಚಿಯನ್ ಧರ್ಮ ಮತಾಂತರದ ಗುರಿಯನ್ನು ಹೊಂದಿತ್ತು. ಅದು “ಮನದಾಳವನ್ನು ಪ್ರಭಾವಿಸುವ” ಚಳುವಳಿಯಾಗಿತ್ತು: Emile Durkheim (ಎಮೀಲ್ ದುರ್ಖ್ಹೈಮ್), *The Evolution of Educational Thought* (ಶೈಕ್ಷಣಿಕ ಚಿಂತನೆಯ ವಿಕಾಸ), ಅನುವಾದ. Peter Collins (ಪೀಟರ್ ಕಾಲಿನ್ಸ್), ಲಂಡನ್ 1977, ಪುಟ. 23–26, 29.

29. Mookerji, *Education.*, p.507.

30. *Ibid.*, p.XXVI.

31. V.R.Madhavan, in S.V.Subramanian, V.R.Madhavan (editors), *Heritage of the Tamils Education and Vocation*, Madras 1986, p.222.